3

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 1101 |
| ಸದಸ್ಯರ ಹೆಸರು | ಶ್ರೀಮತಿ ವೀಣಾ ಅಚ್ಚಯ್ಯ |
| ಉತ್ತರಿಸುವ ದಿನಾಂಕ | 22-12-2021 |
| ಉತ್ತರಿಸುವವರು | ಕಂದಾಯ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕೊಡಗು ಜಿಲ್ಲೆಯಲ್ಲಿ ಆರ್‌ಟಿಸಿಯ ಬೆಳೆ ಕಾಲಂನಲ್ಲಿ, ಬಹು ವಾರ್ಷಿಕ ವಾಣಿಜ್ಯ ಬೆಳೆಗಳಾದ ಕಾಫಿ ಮತ್ತು ಕರಿಮೆಣಸುಗಳು ವರ್ಷದ 365 ದಿನವೂ ನಮೂದಾಗಿರುವ ಬದಲು, 3 ತಿಂಗಳು ಅಥವಾ 6 ತಿಂಗಳಿಗೊಮ್ಮೆ ಪ್ರಸ್ತುತ ನಮೂದಿಸಲಾಗುತ್ತಿರುವುದರಿಂದ, ಬೆಳೆಗಾರರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕಂದಾಯ ಇಲಾಖೆಯ ಆರ್.ಟಿ.ಸಿ.ಯಲ್ಲಿ ಮುಂಗಾರು ಹಿಂಗಾರು ಮತ್ತು ಬೇಸಿಗೆ ಬೆಳೆಗಳನ್ನು ಇಂಡೀಕರಿಸುವಾಗ ಕಾಫಿ ಮತ್ತು ಕರಿಮೆಣಸುಗಳಂತಹ ಬಹು ವಾರ್ಷಿಕ ಬೆಳೆಗಳನ್ನು ಕೂಡ ಇಂಡೀಕರಿಸಲಾಗುತ್ತಿದೆ.<br>ಕೃಷಿ ಇಲಾಖೆಯು ಇ-ಆಡಳಿತ ಇಲಾಖೆಯ ಸಹಯೋಗದೊಂದಿಗೆ, ಬೆಳೆ ಸಮೀಕ್ಷೆ ಕಾರ್ಯವನ್ನು ಮಾಡುತ್ತಿದ್ದು, ಬೆಳೆ ಸಮೀಕ್ಷೆಯನ್ವಯ ಬೆಳೆಗಾರರೇ "ಬೆಳೆ ಸಮೀಕ್ಷೆ ಮೊಬೈಲ್ ಆಪ್" ಮೂಲಕ ತಮ್ಮ ಬೆಳೆಗಳನ್ನು ನಮೂದಿಸಲು ಕಳೆದ 2 ವರ್ಷಗಳಿಂದ ಅವಕಾಶ ಕಲ್ಪಿಸಲಾಗಿದ್ದು, ನಮೂದಿಸಿದ ಬೆಳೆ ಸಮರ್ಪಕವಾಗಿರುವ ಕುರಿತು ರೈತರು ಖಚಿತ ಪಡಿಸಿಕೊಳ್ಳಲು "ಬೆಳೆ ದರ್ಶಕ್ ಮೊಬೈಲ್ ಆಪ್"ನಲ್ಲಿ ಅವಕಾಶ ಕಲ್ಪಿಸಲಾಗಿರುತ್ತದೆ.<br>ಬೆಳೆ ಸಮೀಕ್ಷೆ ತಂತ್ರಾಂಶದ ಮೂಲಕ ಸ್ವೀಕೃತವಾದ ಮಾಹಿತಿಯನ್ನು ಮಾತ್ರ ಯಥಾವತ್ತಪಹಣಿಯಲ್ಲಿ ಇಂಡೀಕರಿಸಲಾಗುತ್ತಿದ್ದು, ಭೂಮಿ ತಂತ್ರಾಂಶದ ಮೂಲಕ ಬೆಳೆಮಾಹಿತಿಯಲ್ಲಿ ನೇರವಾಗಿ ಯಾವುದೇ ರೀತಿಯ ಬದಲಾವಣೆ ಮಾಡುತ್ತಿರುವುದಿಲ್ಲ. ಇದರಿಂದ ರೈತರಿಗೆ ಯಾವುದೇ ತೊಂದರೆಯಾಗುತ್ತಿರುವುದಿಲ್ಲ. |
| ಆ | ಬಂದಿದ್ದಲ್ಲಿ, ಪ್ರಸ್ತುತ 3 ತಿಂಗಳು ಅಥವಾ 6 ತಿಂಗಳಿಗೊಮ್ಮೆ ನಮೂದಿಸಲಾಗುತ್ತಿರುವುದರಿಂದ, ತಾಂತ್ರಿಕ ತೊಂದರೆ ಎದುರಾಗಿ ಬೆಳೆಗಾರರು ಸರ್ಕಾರದ ಸೌಲಭ್ಯಗಳನ್ನು ಪಡೆಯಲು ತೊಂದರೆಯಾಗುತ್ತಿರುವುದು ಹಾಗೂ ಮುಖ್ಯವಾಗಿ ಬೆಳೆ ಹಾನಿಪರಿಹಾರಕ್ಕೆ ಅರ್ಜಿ ಸಲ್ಲಿಸಲು ಅಡ್ಡಿಯಾಗುತ್ತಿರುವ ಕುರಿತು ಸರ್ಕಾರ ಇದುವರೆಗೆ ಕ್ರಮ ಕೈಗೊಂಡಿಲ್ಲದಿರುವುದಕ್ಕೆ ಕಾರಣಗಳೇನು; | ಅನ್ವಯಿಸುವುದಿಲ್ಲ. |
| ಇ | ಈ ಸಮಸ್ಯೆಯನ್ನು ಪರಿಹರಿಸಲು, ಸರ್ಕಾರ ಈ ಕೂಡಲೇ ಕ್ರಮವಹಿಸುವುದೇ? | |

ಸಂಖ್ಯೆ: ಕಂಇ 275 ಎಂಆರ್‌ಆರ್ 2021

(ಆರ್ ಅಶೋಕ)

ಕಂದಾಯ ಸಚಿವರು